# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 547
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ
3. ಉತ್ತರಿಸುವ ದಿನಾಂಕ : 09-03-2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಪ್ಪಳ ಜಿಲ್ಲೆಯಲ್ಲಿ ಇಂದಿಗೂ ಬಾಲಕಾರ್ಮಿಕ ಪದ್ಧತಿ ಜಾರಿಯಲ್ಲಿದ್ದು ಮಕ್ಕಳು ಹೊಲಗದ್ದೆ, ಹೋಟೆಲ್, ಇಟ್ಟಿಗೆ ಭಟ್ಟಿಗಳು ಹಾಗೂ ಬೀದಿ ವ್ಯಾಪಾರಗಳಲ್ಲಿ ದುಡಿಯುತ್ತಿದ್ದು, ಚಿಕ್ಕ ವಯಸ್ಸಿನಲ್ಲಿಯೇ ಹಲವಾರು ದುಶ್ಚಟಗಳಿಗೆ ಬಲಿಯಾಗುತ್ತಿರುವುದು ಹಾಗೂ ಇದರಿಂದಾಗಿ ಮಕ್ಕಳ ಹಕ್ಕಿಗೆ ಧಕ್ಕೆಯುಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಹೌದು |
| (ಆ) | ಬಂದಿದ್ದಲ್ಲಿ, ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗೆ ಈವರೆಗೂ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ. (ಸಂಪೂರ್ಣ ವಿವರ ಒದಗಿಸುವದು) | ಕೊಪ್ಪಳ ಜಿಲ್ಲೆಯಲ್ಲಿ ಬಾಲಕಾರ್ಮಿಕ ಮತ್ತು ಕಿಶೋರ ಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಕಾರ್ಮಿಕ ಇಲಾಖೆ ನಿಯಮಾನುಸಾರ ಹಲವಾರು ಕ್ರಮಗಳನ್ನು ನಿರಂತರವಾಗಿ ಕೈಗೊಂಡಿದ್ದು, ಕೈಗೊಂಡ ಪ್ರಮುಖ ಕ್ರಮಗಳ ವಿವರಗಳು ಈ ಕೆಳಕಂಡಂತಿವೆ;<br>• ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಕೊಪ್ಪಳ ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೇಂದ್ರ ಸರ್ಕಾರದ ರಾಷ್ಟ್ರೀಯ ಬಾಲಕಾರ್ಮಿಕ ಯೋಜನೆ (ಎನ್.ಸಿ.ಎಲ್.ಪಿ) ಜಾರಿಯಲ್ಲಿರುತ್ತದೆ. ಈ ಯೋಜನೆಯ ಮೂಲಕ ಬಾಲಕಾರ್ಮಿಕ ಮತ್ತು ಕಿಶೋರ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ 1986 ಅನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಮಾಡಲಾಗುತ್ತಿದೆ.<br>• ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸೊಸೈಟಿ ಹಾಗೂ ಕಾರ್ಮಿಕ ಇಲಾಖೆ, ಶಿಕ್ಷಣ ಇಲಾಖೆ, ಪೊಲೀಸ್ ಇಲಾಖೆ, ಕಂದಾಯ ಇಲಾಖೆ, ಮಹಿಳಾ ಮಕ್ಕಳ ಕಲ್ಯಾಣ ಇಲಾಖೆ ಹಾಗೂ ಇತರೆ ಸಂಬಂಧಿಸಿದ ಇಲಾಖೆಗಳ ಸಹಯೋಗದೊಂದಿಗೆ ಜಿಲ್ಲಾದ್ಯಂತ ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ ಕುರಿತಾಗಿ ಕಾನೂನು ಅರಿವು ಕಾರ್ಯಕ್ರಮಗಳು, ಬೀದಿ ನಾಟಕಗಳು, ಕರಪತ್ರ ಹಂಚುವಿಕೆ ಹಾಗೂ ಆಟೋ ಪ್ರಚಾರದ ಮೂಲಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>• ಬಾಲಕಾರ್ಮಿಕ ಪದ್ಧತಿಯನ್ನು ತಡೆಗಟ್ಟಲು ಬಾಲಕಾರ್ಮಿಕ ಮತ್ತು ಕಿಶೋರ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ 1986ರಡಿ ದೂರು ಆಧಾರಿತ ಹಾಗೂ ಹಠಾತ್ ದಾಳಿಗಳನ್ನು ನಡೆಸಿ ಕೆಲಸದಲ್ಲಿ ತೊಡಗಿರುವ ಬಾಲಕಾರ್ಮಿಕರನ್ನು ಬಿಡುಗಡೆಗೊಳಿಸಿ ಮಕ್ಕಳ ಕಲ್ಯಾಣ ಸಮಿತಿಗೆ ಮತ್ತು ಮುಖ್ಯವಾಹಿನಿ ಶಾಲೆಗಳಿಗೆ ದಾಖಲಿಸಲಾಗಿರುತ್ತದೆ, ತಪ್ಪಿತಸ್ಥ ಮಾಲೀಕರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗಿದೆ. |

| | | |
|---|---|---|
| | | • ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕ ಮುಕ್ತ ಜಿಲ್ಲೆಗಳ ಘೋಷಣೆ ಹೊರಡಿಸಲು ಅವಶ್ಯವಿರುವ "MEMORANDUM OF STANDARD OPERATING PROCEDURES (MSOPs)" FOR DISTRICT ADMINISTRATION TO DECLARAE A DISTRICT AS "CHILD AND ADOLOSCENT LABOUR FREE ZONE-CALFZ" ಅನ್ನು ಸಿದ್ಧಪಡಿಸಿ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ:09/11/2017 ರಂದು ಪ್ರಕಟಿಸಲಾಗಿರುತ್ತದೆ ಹಾಗೂ ಜಿಲ್ಲಾಧಿಕಾರಿಗಳ ಮೂಲಕ ಅನುಷ್ಠಾನಕ್ಕಾಗಿ ಕ್ರಮಕೈಗೊಳ್ಳಲಾಗಿದೆ.<br>• ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ನಡೆಸಲ್ಪಡುವ ಬಾಲಕಾರ್ಮಿಕ ಸಂರಕ್ಷಣಾ ಕಾರ್ಯಚರಣೆಯಲ್ಲಿ ಜಿಲ್ಲಾ ಮಕ್ಕಳ ರಕ್ಷಣಾ ಘಟಕ, ಮಕ್ಕಳ ಸಹಾಯವಾಣಿ ಹಾಗೂ ತೆರೆದ ತಂಗುದಾಣಗಳ ಸಿಬ್ಬಂದಿಗಳು ಕೂಡ ಕಾರ್ಮಿಕ ಇಲಾಖೆ ಹಾಗೂ ಪೊಲೀಸ್ ಇಲಾಖೆಯೊಂದಿಗೆ ಪಾಲ್ಗೊಳ್ಳುತ್ತಿದ್ದಾರೆ.<br>• ಈ ಕಾರ್ಯಾಚರಣೆ ವೇಳೆಯಲ್ಲಿ ಸಂರಕ್ಷಿಸಲ್ಪಟ್ಟ ಮಕ್ಕಳನ್ನು ಮಕ್ಕಳ ಕಲ್ಯಾಣ ಸಮಿತಿ ಮೂಲಕ ದೀರ್ಘಾವಧಿ ರಕ್ಷಣೆ ಪೋಷಣೆಗಾಗಿ ಬಾಲಮಂದಿರಗಳಿಗೆ ಹಾಗೂ ತಾತ್ಕಾಲಿಕ ರಕ್ಷಣೆ ಪೋಷಣೆಗಾಗಿ ತೆರೆದ ತಂಗುದಾಣಗಳಲ್ಲಿ ದಾಖಲಿಸಲಾಗುತ್ತದೆ.<br>• ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ ಕುರಿತು ಇಲಾಖಾ ವತಿಯಿಂದ ಜಿಲ್ಲೆಗಳಲ್ಲಿ ಬಾಲಕಾರ್ಮಿಕರನ್ನು ದುಡಿಸಿಕೊಳ್ಳುವಂತಹ ಉದ್ದಿಮೆದಾರರು, ಹೋಟೆಲ್ ಮಾಲೀಕರು, ಇಟ್ಟಂಗಿ ಭಟ್ಟಿಗಳು, ಮಂಡಕ್ಕಿ ಭಟ್ಟಿಗಳು, ಬಾರ್ & ರೆಸ್ಟೋರೆಂಟ್‌ಗಳು ಮಾಲೀಕರಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ. ಗ್ರಾಮ ಸಭೆಗಳಲ್ಲೂ ಸಹ ಮಕ್ಕಳ ಪಾಲಕರು ಮತ್ತು ಪೋಷಕರಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖಾ ವತಿಯಿಂದ ನೀಡಲಾಗುತ್ತಿದೆ. |
| (ಇ) | ಮಕ್ಕಳನ್ನು ದುಡಿಮೆಗೆ ಇಟ್ಟುಕೊಂಡವರು ಹಾಗೂ ದುಡಿಮೆಗೆ ಕಳುಹಿಸಿದವರ ಮೇಲೆ ಇಲ್ಲಿಯವರೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ಮಾಹಿತಿ ಒದಗಿಸುವುದು.) | ಕಳೆದ ಮೂರು ವರ್ಷಗಳಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಮಕ್ಕಳನ್ನು ದುಡಿಮೆಗೆ ಇಟ್ಟುಕೊಂಡ 10 ಪ್ರಕರಣಗಳು ಪತ್ತೆಯಾಗಿದ್ದು, ಸದರಿ 10 ಪ್ರಕರಣಗಳಲ್ಲಿ ಮೊಕದ್ದಮೆಗಳನ್ನು ದಾಖಲಿಸಲಾಗಿರುತ್ತದೆ. ಒಟ್ಟು ಮೂರು ಪ್ರಕರಣಗಳಲ್ಲಿ ಒಟ್ಟು ರೂ. 65,000/-ಗಳ ದಂಡ ವಸೂಲಿ ಮಾಡಲಾಗಿದೆ. ಮಾಹಿತಿಯನ್ನು **ಅನುಬಂಧ**ದಲ್ಲಿ ಲಗತ್ತಿಸಿದೆ. |

**ಸಂಖ್ಯೆ: ಕಾಇ 9 ಸಿಎಲ್‌ಸಿ 2020**

6/3/2020

**(ಅರಬೈಲ್ ಶಿವರಾಮ್ ಹೆಬ್ಬಾರ್)**
**ಕಾರ್ಮಿಕ & ಸಕ್ಕರೆ ಸಚಿವರು.**

## ಅನುಬಂಧ

| ಕ್ರ ಸಂ | ವರ್ಷ | ನಡೆಸಲಾದ ತಪಾಸಣೆಗಳು | ರಕ್ಷಿಸಿದ ಬಾಲಕಾರ್ಮಿಕರ ಸಂಖ್ಯೆ | ಉಲ್ಲಂಘನೆಯಾದ ಪ್ರಕರಣಗಳ ಸಂಖ್ಯೆ | ಮೊಕದ್ದಮೆ ದಾಖಲಿಸಲಾದ ಪ್ರಕರಣಗಳು | ಶಿಕ್ಷೆಯಾದ ಪ್ರಕರಣಗಳು | ವಸೂಲಾತಿ ಯಾದ ದಂಡ | ಶಿಕ್ಷೆಗೊಳಗಾದ ವ್ಯಕ್ತಿಗಳ ಸಂಖ್ಯೆ |
|---|---|---|---|---|---|---|---|---|
| 1 | 2017 | 469 | 44 | 01 | 01 | - | - | - |
| 2 | 2018 | 77 | 07 | 07 | 07 | 01 (ದಂಡ ವಿಧಿಸಲಾಗಿರುತ್ತದೆ.) | 20,000/- | - |
| 3 | 2019 | 157 | 82 | 02 | 02 | - | 45,000/- | - |
| ಒಟ್ಟು | | **703** | **133** | **10** | **10** | **01** | **65,000/-** | |